ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಬೀದರ್ ಜಿಲ್ಲೆಯ ಮಿನಿ ವಿಧಾನಸೌಧದ ಬಗ್ಗೆ

ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

242 (210) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೀದರ್ ಮಿನಿ ವಿಧಾನಸೌಧ ನಿರ್ಮಾಣ ಕಾರ್ಯ ಯಾವ ಹಂತದಲ್ಲಿದೆ; ಮಿನಿ ವಿಧಾನಸೌಧಕ್ಕೆ ಸ್ಥಳ ಗುರುತಿಸಲಾಗಿದೆಯೇ; ಒಂದು ವೇಳೆ ಗುರುತಿಸಿದ್ದರೆ ಕಾಮಗಾರಿ ಪ್ರಾರಂಭ ಮಾಡುವುದು ಯಾವಾಗ;

(ಆ) ಜಿಲ್ಲಾ ಕೇಂದ್ರ ಬೀದರ್ನಲ್ಲಿ ಜಿಲ್ಲಾಡಳಿತ ಕಛೇರಿಗಳ ಸಂಕೀರ್ಣ ನಿರ್ಮಾಣಕ್ಕೆ ಸ್ಥಳ ಅಂತಿಮ ಗೊಳಿಸಲಾಗಿದೆಯೇ; ಸ್ಥಳ ಅಂತಿಮಗೊಳಿಸಿದರೆ ನಿರ್ಮಾಣ ಕಾರ್ಯ ಯಾವಾಗ ಪ್ರಾರಂಭವಾಗಲಿದೆ?